
ಲಾರಿ
ಬೇಕರ
SHWETA SALUNKHE
-ಶ್ವೇತಾ ಸಾಳುಂಖೆ ಮತ್ತು
ನಾಗೇಶ ಮೋನೆ
ಕನ್ನಡಕ್ಕೆ – ಪ್ರಭಾಕರ ನಾನಾವಟಿ

# ಲಾರಿ ಬೇಕರ





डेक्कन एज्युकेशन सोसायटीचे

न्यू इंग्लिश स्कूल, टिळक रोड, पुणे ३०.



'अहम भारत' उपक्रमांतर्गत पुस्तिका ®

Cadence Design Systems, Inc.

cadence®

# ಲಾರಿ ಬೇಕರ



ಶ್ರೀಮಂತರು, ಮಧ್ಯಮ ವರ್ಗದವರು, ಆದಿವಾಸಿಗಳು, ಮೀನುಗಾರರು... ಮುಂತಾದವರಿಗಾಗಿ ನಾನು ಎಂದಿಗೂ ಮನೆ ಕಟ್ಟಲಿಲ್ಲ. ಆದರೆ ಓರ್ವ ಮ್ಯಾಥ್ಯೂ, ಓರ್ವ ಭಾಸ್ಕರನ್, ಮುನೀರ ಇಲ್ಲವೆ ಶಂಕರನ್ ಇಂತಹರಿಗಾಗಿಯಷ್ಟೇ ನಾನು ಮನೆ ಕಟ್ಟಿದ್ದೇನೆ.

# ಲಾರಿ ಬೇಕರ






"ವಾಸ್ತು ನಿರ್ಮಿತಿಯ ಎಷ್ಟೋ ಉಚ್ಚಮಟ್ಟದ ಯೋಜನೆಗಳು ಈ ದೇಶದಲ್ಲಿ ನೆರವೇರಿವೆ. ಭಾರತಕ್ಕೆ ತನ್ನದೇ ಆದ ವಾಸ್ತು ಶಿಲ್ಪದ ಒಂದು ಉಚ್ಚಮಟ್ಟದ ಶೈಲಿ ಇದೆ. ಜಗತ್ತಿನಲ್ಲಿಯ ಬೇರೆ ಯಾವದೇ  ದೇಶಗಳಲ್ಲಿ ಇಂತಹ ವಿವಿಧತೆಯುಳ್ಳ ಶೈಲಿ ಇರಲಿಕ್ಕಿಲ್ಲ. ಇದನ್ನು ನಾವು ಎಂದಿಗೂ ನಶಿಸಕೂಡದು, ಎಂದು ನನಗೆ ಅನ್ನಿಸುತ್ತದೆ. ಇದ್ದದ್ದನ್ನು ರಕ್ಷಿಸಿ ಇನ್ನಷ್ಟು ಬೆಳೆಸಬೇಕು. ಇವುಗಳನ್ನು ಹೆಚ್ಚಾನು ಹೆಚ್ಚು ಉಪಯೋಗಿಸಿ ಇನ್ನಷ್ಟು ಉತ್ತಮವಾದ, ಅಂದ ಚೆಂದದ ಕಟ್ಟಡಗಳನ್ನು ನಿರ್ಮಿಸುತ್ತ ಭಾರತೀಯರ ಪರಂಪರೆಯನ್ನು ಮುಂದುವರಿಸಬೇಕು."

Laurie Baker

## ಲಾರಿ ಬೇಕರ

2 ಮಾರ್ಚ 1917 ರಂದು ಲಾರೆನ್ಸ ವಿಲ್ಫ್ರೆಡ್ ಬೇಕರ ಇವರ ಜನ್ಮವು ಇಂಗ್ಲಂಡಿನಲ್ಲಿ ಆಯಿತು. ಅವರನ್ನು ನಾವು ಲಾರಿ ಬೇಕರ ಎಂದು ಕರೆಯುತ್ತೇವೆ. ನಮಗೆ ಪರಿಚಿತರಾದ ಲಾರಿ ಬೇಕರ ಇವರು ಒಂದು ಕರ್ಮಠ ಸಂಪ್ರದಾಯವಿದ್ದ ಮನೆಯಲ್ಲಿ ಹುಟ್ಟಿ ಬೆಳೆದರು. ಬೇಕರ ಇವರಿಗೆ ಚಿಕ್ಕ ವಯಸ್ಸಿನಿದ್ದಾಗಿನಿಂದಲೂ ವಾಸ್ತುಶಿಲ್ಪ ಮತ್ತು ಕಟ್ಟಡ ನಿರ್ಮಿತಿ ಬಹು ಇಷ್ಟವಾಗಿದ್ದವು. ಕೇವಲ ಹದಿನಾರದ ಹರೆಯಲ್ಲಿ ಸಾಯಕಲ್ ಮೇಲೆ ಕುಳಿತು ಅವರು ಇಡೀ ಯುರೋಪಿಯನ್ ದೇಶಗಳ ಪ್ರವಾಸ ಕೈಗೊಂಡರು. ಈ ಪ್ರವಾಸದಲ್ಲಿ ಅವರು ಯುರೋಪದಲ್ಲಿಯ ವಾಸ್ತುಶಿಲ್ಪ ಮತ್ತು ಭೂದೃಶ್ಯಗಳನ್ನು ಮನಸಾರೆ ನೋಡಿದರು. ಈ ತರುಣ ಲಾರಿಯ ಮೇಲೆ ಅವು ಸಾಕಷ್ಟು ಪ್ರಭಾವ ಬೀರಿದವು. ಯುರೋಪದ ಪ್ರವಾಸ ಮುಗಿಸಿದ ನಂತರ ಅವರಿಗೆ ವಾಸ್ತುವಿದ್ಯೆಯ ಕ್ಷೇತ್ರದಲ್ಲಿ ಕಾರ್ಯ ಮಾಡಬೇಕೆಂದು ನಿಶ್ಚಯಿಸಿದರು.

England

## ಶಿಕ್ಷಣ

ಮಾಧ್ಯಮಿಕ ಶಿಕ್ಷಣ ಮುಗಿದಾದ ಮೇಲೆ ಅವರು ಬರ್ಮಿಂಗಹ್ಯಾಮದಲ್ಲಿಯ ಸ್ಕೂಲ ಆಫ ಆರ್ಕಿಟೆಕ್ಚರ (School of Architecture) ದಲ್ಲಿ ಪ್ರವೇಶ ಪಡೆದರು. 1938ರಲ್ಲಿ ಅವರು ರಾಯಲ್ ಇನ್ಸ್ಟಿಟ್ಯೂಟ ಆಫ ಆರ್ಕಿಟೆಕ್ಚರ(Royal Institute of Architecture) ದ ಸದಸ್ಯರಾದರು. ಆದರೆ ವಾಸ್ತುಶಿಲ್ಪಿ ಎಂದು ಇಂಗ್ಲಂಡಿನಲ್ಲಿಯೇ ವೃತ್ತಿ ಮಾಡುವ ಸಂಧಿ ಅವರಿಗೆ ದೊರೆಯಲಿಲ್ಲ. ಅದರ ಮರುವರುಷವೇ 1939ರಲ್ಲಿ ಎರಡನೆಯ ಜಾಗತಿಕ ಮಹಾಯುದ್ಧವು ಪ್ರಾರಂಭಿಸಿತು

## "ಫ್ರೆಂಡ್ಸ" ಅಂಬ್ಯುಲನ್ಸ

ಬೇಕರ ಮತ್ತು ಅವರ ಸಂಗಡಿಗರು ಫ್ರೆಂಡ್ಸ ಅಂಬ್ಯುಲನ್ಸ ಯುನಿಟ (Friends Ambulance Unit - FAU) ಎಂಬ ಎರಡನೆಯ ಮಹಾಯುದ್ಧದ ಕಾಲದಲ್ಲಿ ಗಾಯಗೊಂಡ ಸೈನಿಕರ ಸೇವೆ ಮಾಡುವ ಪಡೆಯಲ್ಲಿ ಸ್ವಯಂಸೇವಕರೆಂದು ಸೇರ್ಪಡೆಯಾದರು. ಈ ಸ್ವಯಂಸೇವಕರಿಗೆ ಅನೆಸ್ಥೆಸಿಯಾ, ಚಿಕ್ಕ ಪುಟ್ಟ ಸರ್ಜರಿ, ಖುಗ್ಣೋಪಚಾರ, ಮತ್ತು ಇಂಜೆಕ್ಷನ್ ಕೊಡುವ ತರಬೇತಿ ಕೊಡಲಾಯಿತು.



# ಚೀನ ಮತ್ತು ಜಪಾನ ನಡುವಿನ ಯುದ್ಧ

ಮಹಾಯುದ್ಧದ ಕೆಲ ಕಾಲದ ಮೇಲೆ ಚೀನ ಮತ್ತು ಜಪಾನದ ನಡುವೆ ಯುದ್ಧ ಪ್ರಾರಂಭವಾಯಿತು. ಚೀನದ ಸರ್ಕಾರ FAUದ ಸ್ವಯಂಸೇವಕರನ್ನೇ ಯುದ್ಧದಲ್ಲಿ ಗಾಯಗೊಂಡ ಯೋಧರ ಶುಶ್ರೂಷೆಗಾಗಿ ಕರೆಸಿಕೊಂಡಿತು. ಲಾರಿ ಬೇಕರ ಕೂಡ ಈ ವೈದ್ಯಕೀಯ ಸ್ವಯಂಸೇವಕರ ಪಡೆಯ ಜೊತೆ ಹೋಗುತ್ತಿದ್ದರು.






## ಮಹಾತ್ಮಾ ಗಾಂಧೀಜಿಯವರಿಂದ ಪ್ರೇರಣೆ

ಕೆಲ ಕಾಲದ ಚೀನದಲ್ಲಿಯ ವೈದ್ಯಕೀಯ ಸೇವೆಯ ನಂತರ **FAU** ಮ್ಯಾನಮಾರದಲ್ಲಿ ಗಾಯಗೊಂಡ ಸೈನಿಕರ ಆರೈಕೆ ಮಾಡತೊಡಗಿತು. ಆಗ ಇವರು ಕುಷ್ಠರೋಗಿಗಳ ಸೇವೆ ಮಾಡಿದರು. ಈ ಸೇವೆಕಾಲದಲ್ಲಿ ತಮ್ಮ ಪ್ರಕೃತಿಯ ಪರಿವೆ ಮಾಡದೆ ದಿನವಿಡಿ ಕೆಲಸ ಮಾಡುತ್ತಿದ್ದರು. ಆದ್ದರಿಂದ ಅವರಿಗೆ ಪ್ರಕೃತಿ ಅಸ್ವಾಸ್ಥ್ಯದಿಂದಾಗಿ ಇಂಗ್ಲಂಡಿಗೆ ಮರುಳಬೇಕಾಯಿತು.

ಇಂಗ್ಲಂಡಿಗೆ ಹೋಗಬೇಕಾದರೆ ಮ್ಯಾನಮಾರದಿಂದ ಮುಂಬಯಿಗೆ ಬಂದು ಮುಂದೆ ಪ್ರವಾಸವನ್ನು ಹಡಗಿನಲ್ಲಿ ಮಾಡಬೇಕಾಗುತ್ತಿತ್ತು. ಆದರೆ ಮುಂಬಯಿಗೆ ಬಂದಾಗ ಹಡಗಿಗಾಗಿ ಮೂರು ತಿಂಗಳು ನಿಲ್ಲಬೇಕಾದ್ದರಿಂದ ಬೇಕರ ಇವರಿಗೆ ಮಹಾತ್ಮಾ ಗಾಂಧೀಜಿಯವರನ್ನು ಭೆಟ್ಟಿಯಾಗುವ ಸಂಧಿ ದೊರೆಯಿತು. ಗಾಂಧೀಜಿಯವರ ಅಹಿಂಸೆ ಮತ್ತು ಪ್ರೇಮದ ಸಂದೇಶಗಳು ಅವರ ಮನಸೆಳೆದವು. ಬೇಕರ ಇವರಿಗೆ ಭಾರತಕ್ಕೆ ಮರಳಿ ಬರಲು ಗಾಂಧೀಜಿಯವರು ಒತ್ತಾಯಿಸಿದರು. “ಭಾರತದ ಹಳ್ಳಿಗಾಡಿನಲ್ಲಿ ಮನೆಗಳ ಅವಶ್ಯಕತೆ ಇದೆ. ಹಳ್ಳಿಗರಿಗಾಗಿ ಮನೆ ಕಟ್ಟುವಾಗ ಕಟ್ಟುವ ಜಾಗದಿಂದ **5-6** ಮೈಲು ದೂರಕ್ಕಿಂತ ಕಡಿಮೆ ಇರುವ ಸ್ಥಳಗಳಲ್ಲಿ ದೊರೆಯುವ ಕಟ್ಟಡದ ಸಾಹಿತ್ಯವನ್ನು ಬಳಿಸಬೇಕು.” ಎಂದು ಗಾಂಧೀಜಿಯವರು ಬೇಕರರಿಗೆ ತಿಳಿ ಹೇಳಿದರು.

## ಸಹಜೀವನದ ಪ್ರಾರಂಭ

1945ರಲ್ಲಿ ಲಾರಿ ಬೇಕರ ಇವರು ಕುಷ್ಠ ರೋಗಿಗಳ ಸೇವೆ ಮಾಡಲೆಂದು ಭಾರತಕ್ಕೆ ಮರಳಿ ಬಂದರು. ಆಗ ಅವರ ಗೆಳೆಯರಾದ ಡಾ. ಚ್ಯಂಡಿಯವರ ತಂಗಿ ಎಲಿಝಾಬೆಥ ಜಾಕೋಬ ಇವರ ಪರಿಚಯವಾಯಿತು. ಎಲಿಝಾಬೆಥ ಕೂಡ ಡಾಕ್ಟರರಾಗಿದ್ದರು.

ಲಾರಿ ಬೇಕರ ಇವರು ಎಲಿಝಾಬೆಥ ಜತೆಗೂಡಿ ಅವರ ಹಳೆಯ ದವಾಖಾನೆಯನ್ನು ದೊಡ್ಡ ಆಸ್ಪತ್ರೆಯಲ್ಲಿ ಮಾರ್ಪಾಡಿಸುವ ಕೆಲಸಕ್ಕೆ ತೊಡಗಿದರು. ಎಲಿಝಾಬೆಥ ಇವರು ಕುಷ್ಠರೋಗಿಗಳ ಔಷಧೋಪಚಾರ ಮಾಡುತ್ತಿದ್ದರು. ಈರ್ವರ ಉದ್ದೇಶಗಳು ಸಮಾನವಾಗಿದ್ದವು.

ಒಂದು ದಿನ ಇವರು ಇಬ್ಬರೇ ಇದ್ದಾಗ ಲಾರಿ ಬೇಕರ ಎಲಿಝಾಬೆಥ ಮುಂದೆ ವಿವಾಹದ ಬೇಡಿಕೆಯನ್ನು ಇಟ್ಟರು. ಎಲಿಝಾಬೆಥ ಲಾರಿ ಬೇಕರ ಜತೆ ಕೆಲಸ ಮಾಡುತ್ತಿದ್ದರಿಂದ ಲಾರಿಯವರ ಜೀವನದ ಉದ್ದೇಶ ಹಾಗು ಅವರ ಸರಳ ಸ್ವಭಾವವನ್ನು ಮೆಚ್ಚಿದ್ದರು. ಎಲಿಝಾಬೆಥ ಕೂಡಲೆ ಒಪ್ಪಿಗೆ ಕೊಟ್ಟರು. 1948ರಲ್ಲಿ ಅವರ ವಿವಾಹ ನೆರವೇರಿತು.



# ಹಿಮಾಲಯದಲ್ಲಿ ಹದಿನಾರು ವರುಷ

ಮದುವೆಯಾದ ಕೂಡಲೆ ಲಾರಿ ಬೇಕರ ಮತ್ತು ಎಲಿಝಾಬೆಥ ಜಾಕೋಬ ಹಿಮಾಲಯದ ಹತ್ತಿರದ ಚಂದಾಗ ಎಂಬ ಹಳ್ಳಿಯಲ್ಲಿ ಇರತೊಡಗಿದರು. ಹಳ್ಳಿಯಲ್ಲಿ ಹೊಸ ಡಾಕ್ಟರರು ಬಂದಿದ್ದಾರೆಂಬ ಸುದ್ದಿ ಹಬ್ಬಿದಾಗ ಸುತ್ತಮುತ್ತಲಿನ ಹಳ್ಳಿಗಳಲ್ಲಿಯ ಸಾಕಷ್ಟು ಹಳ್ಳಿಗರು ಶುಶ್ರೂಷೆಗಾಗಿ ಬರತೊಡಗಿದರು. ಮೊದಮೊದಲು ಬೇಕರ ಇವರು ಒಂದು ಚಹದ ಅಂಗಡಿಯನ್ನೇ ಆಸ್ಪತ್ರೆಯಲ್ಲಿ ಮಾರ್ಪಡಿಸಿದ್ದರು. ಆ ಮೇಲೆ ಅವರು ಚೆರಾ ಎಂಬ ಸಮೀಪದ ಹಳ್ಳಿಯಲ್ಲಿ ಇರತೊಡಗಿದರು. ಅಲ್ಲಿ ಅವರು ತಮಗಾಗಿ ಒಂದು ಮನೆ ಹಾಗು ರೋಗಿಗಳ ಉಪಚಾರಕ್ಕಾಗಿ ಒಂದು ಚಿಕ್ಕ ಆಸ್ಪತ್ರೆಯನ್ನು ಕಟ್ಟಿದರು. ಮತ್ತು ಅಲ್ಲಿಯೇ ಮಡದಿಯ ಕೈಕೆಳಗೆ ಕೆಲಸ ಮಾಡತೊಡಗಿದರು. ಎಷ್ಟೋ ಸಲ ಜನರು “ನೀವು ವಾಸ್ತುಶಿಲ್ಪಿಗಳು. ಆಸ್ಪತ್ರೆಯಲ್ಲಿ ನಿಮ್ಮದೇನು ಕೆಲಸ?” ಎಂದು ಲಾರಿಯವರನ್ನು ಪ್ರಶ್ನಿಸುತ್ತಿದ್ದರು. ಆಗ ಬೇಕರ ಮುಗುಳು ನಗುತ್ತ “ಈ ಆಸ್ಪತ್ರೆಯಲ್ಲಿ ನನ್ನ ಹೆಂಡತಿ ಒಬ್ಬಳೇ ಡಾಕ್ಟರಳು. ನಾನು ಮಾತ್ರ ಇಲ್ಲಿಯ ಒಬ್ಬನೇ ಒಬ್ಬ ಸಿಬ್ಬಂದಿ!” ಎಂದು ಉತ್ತರ ಕೊಡುತ್ತಿದ್ದರು.
ಆ ಮೇಲೆ ಬೇಕರ ಇವರು ಉತ್ತರ ಪ್ರದೇಶದ ಫೈಜಾಬಾದದಲ್ಲಿ ಕುಷ್ಠರೋಗಿಗಳಿಗಾಗಿ ಆಸ್ಪತ್ರೆಯನ್ನು ನಿರ್ಮಿಸಿದರು.



# ಕಟ್ಟಡಗಳಿಗಾಗಿ ಸ್ಥಳೀಯ ತಂತ್ರಜ್ಞಾನ

ಇಡಿ ಭಾರತ ದೇಶವನ್ನು ಸುತ್ತಾಡಿದಾಗ ಮತ್ತು ಈ ದೇಶದಲ್ಲಿಯ ವಿವಿಧತೆಯನ್ನು ಅಭ್ಯಸಿಸಿದಾಗ ಲಾರಿ ಬೇಕರ ಇವರಿಗೆ ತಮ್ಮ ಬ್ರಿಟಿಶ ವಾಸ್ತುಶಿಲ್ಪದ ಪದವಿ ಮತ್ತು ತರಬೇತಿ ಕೆಲಸಕ್ಕೆ ಬಾರದು ಎಂಬುದು ಮನಗಂಡಿತು. ಇದಾದ ಮೇಲೆ ಬೇಕರ ಇವರು ಸುತ್ತುಮುತ್ತಲು ದೊರೆಯುವ ಕಟ್ಟಡಕ್ಕೆ ಬೇಕಾಗುವ ವಸ್ತುಗಳ ಮತ್ತು ಅವುಗಳಿಂದ ಕಟ್ಟಡ ನಿರ್ಮಿಸುವ ಅಭ್ಯಾಸ ಮಾಡತೊಡಗಿದರು. ಸ್ಥಳೀಯ ವಸ್ತುಗಳ ಸಂಗ್ರಹದ ಬಗ್ಗೆ ಮತ್ತು ಅವುಗಳ ವರ್ಗೀಕರಣದ ಬಗ್ಗೆ ಅವರು ಅಭ್ಯಸಿಸಿದರು. ಅತೀ ಕಡಿಮೆ ವೆಚ್ಚದ ಮತ್ತು ಕಟ್ಟಡ ಜಾಗದ ಸುತ್ತಮುತ್ತಲು ದೊರೆಯುವ ವಸ್ತುಗಳನ್ನು ಹೇಗೆ ಉಪಯೋಗಿಸಬಹುದು ಎಂಬುದನ್ನು ಹಳ್ಳಿಯಲ್ಲಿಯ ಮೇಸನ್ ಮತ್ತು ಕಟ್ಟಡದ ಕೂಲಿ ಕೆಲಸ ಮಾಡುವವರಿಂದ ಕಲಿಯತೊಡಗಿದರು. ಅವರು ಕೂಡ ಒಬ್ಬ ಸಾಮಾನ್ಯ ಹಳ್ಳಿಗನಂತೆ ಇರತೊಡಗಿದರು. ಲಾರಿ ಬೇಕರ ಶಾಲೆಗಳ, ಆಸ್ಪತ್ರೆಗಳ, ಮತ್ತು ಸಾಮಾಜಿಕ ಸಂಸ್ಥೆಗಳ ಎಷ್ಟೋ ಕಟ್ಟಡಗಳ ರಚನೆ ಮಾಡಿ ಅವುಗಳನ್ನು ನಿರ್ಮಿಸಿದರು. ಎಷ್ಟೋ ಸಲ ಈ ಕಟ್ಟಡಗಳಿಗಾಗಿ ತಮ್ಮ ಜೇಬಿನಲ್ಲಿಯ ದುಡ್ಡನ್ನು ಕೂಡ ಕೊಡುತ್ತಿದ್ದರು. ಬೇಕರ ಇವರ ವೈಶಿಷ್ಟ್ಯದ ಗುಟ್ಟು ಇಂತಹದರಲ್ಲಿ ಅಡಗಿದೆ.



Kerala

## ಕೇರಳ

1963ರಲ್ಲಿ ಬೇಕರ ಇವರು ತಮ್ಮ ಪತ್ನಿಯ ಜತೆ ಹಿಮಾಲಯದ ಪರಿಸರವನ್ನು ತ್ಯಜಿಸಿ ಕೇರಳದ ಪಶ್ಚಿಮ ಘಟ್ಟದ ಬುಡಕಟ್ಟು ಜನರಿರುವ ವಾಗಮಾನ ಎಂಬ ಹಳ್ಳಿಯಲ್ಲಿ ವಾಸಿಸತೊಡಗಿದರು. ಕೆಲ ವರುಷಗಳ ನಂತರ ಇವರು ಆ ಪ್ರದೇಶದಲ್ಲಿ ಕುಷ್ಠರೋಗಿಗಳಿಗಾಗಿ ಒಂದು ಆಸ್ಪತ್ರೆಯನ್ನು ಕಟ್ಟಿದರು. ಕೆಲ ಕಾಲದ ನಂತರ ಈ ಕುಟುಂಬವು ತಿರುವನಂತಪುರಮ್ ಕ್ಕೆ ಇರಲು ಹೋದಾಗ ಅಲ್ಲಿಯೂ ಕೂಡ ಕುಷ್ಠರೋಗಿಗಳ ಸೇವೆ ಅವರು ಮಾಡತೊಡಗಿದರು. ಕ್ರಮೇಣವಾಗಿ ಈ ನಗರದಲ್ಲಿಯೇ ಅವರೆಲ್ಲರು ಇರತೊಡಗಿದರು.

.

# 'ದಿ ಹ್ಯಮ್ಲೆಟ'

ಬೇಕರ ಕುಟುಂಬವು ತಿರುವನಂತಪುರಮ್ ದಲ್ಲಿ ಇದ್ದಾಗ ತಮಗಾಗಿ ಎಂದು ಒಂದರ್ಧ ಎಕರೆ ಭೂಮಿಯನ್ನು ಕೊಂಡುಕೊಂಡರು. ಗುಡ್ಡದ ತುದಿಯಿಂದ ಕೊಳ್ಳವನ್ನು ನೋಡುವ 'ದಿ ಹ್ಯಮ್ಲೆಟ' ಈ ಮನೆ ಎಂದರೆ ವಾಸ್ತುಶಿಲ್ಪದ ಮಾದರಿಯನ್ನು ಬಣ್ಣಿಸುವ ಒಂದು ಸಂಗ್ರಹಾಲಯವೇ ಸರಿ.

ಈ ವಾಸ್ತುವಿನ ಇಳಿಜಾರಾಗಿ ರಚಿಸಿದ ಹಂಚುಗಳು, ವಾಸ್ತು ರಚನೆ, ಗೋಡೆಯಲ್ಲಿಯ ಇಟ್ಟಿಗೆಗಳು, ಅಲ್ಲಲ್ಲಿ ಇದ್ದ ಜಾಳಿಗೆಯ ರಚನೆ, ಹಳೆ ಮನೆಗಳಿಂದ ಬೇರ್ಪಡಿಸಿದ ಖಿಡಕಿ-ಬಾಗಿಲುಗಳ ಮರುಬಳಿಕೆ, ಇದರಿಂದಾಗಿ 'ದಿ ಹ್ಯಮ್ಲೆಟ' ಕೇರಳದ ಬದಲಾಗುತ್ತ ಹೋದ ವಾಸ್ತುಶಿಲ್ಪದ ಶೈಲಿಯ ಇತಿಹಾಸವನ್ನು ಹೇಳುತ್ತದೆ.



# ಬೇಕರ ಇವರ ಕಾರ್ಯ

ತಮ್ಮ 40 ವರುಷದ ಕಾರ್ಯಕಾಲದಲ್ಲಿ ಬೇಕರ ಇವರು ಸಾಕಷ್ಟು ಕಟ್ಟಡಗಳ ನಿರ್ಮಾಣ ಮಾಡಿದರು. ಪ್ರಾರಂಭದ ದಿನಗಳ ಪಿಥೋರಗಡದ ಕಾರ್ಯದ ವಿವರಗಳು ದೊರೆತಿಲ್ಲ. 1963ರಲ್ಲಿ ತಿರುವನಂತಪುರಮ್ ದಲ್ಲಿ ನೆಲೆಸಿದ ಮೇಲೇಯೆ ನಿಜ ಅರ್ಥದಿಂದ ವಾಸ್ತುಶಿಲ್ಪದ ಕಾರ್ಯಕ್ಕೆ ಪ್ರಾರಂಭ ಮಾಡಿದರು ಎಂದೆನ್ನಬಹುದು.

ಅವರು ನಿರ್ಮಿಸಿದ ಖಾಸಗಿ ಮನೆಗಳ ಮತ್ತು ಇಗರ್ಜಿಗಳ ಸಂಖ್ಯೆ ಸಾವಿರಕ್ಕೂ ಹೆಚ್ಚಿರಬಹುದು. ತಿರುವನಂತಪುರದಲ್ಲಿ ನಿರ್ಮಿಸಿದ ಕಡಿಮೆ ವೆಚ್ಚದ ಮತ್ತು ಸ್ಥಳೀಯ ವಸ್ತುಗಳನ್ನು ಉಪಯೋಗಿಸಿದ ಕಟ್ಟಡಗಳೇ ಅವರ ಎಲ್ಲ ಕಟ್ಟಡಗಳಲ್ಲಿ ವಿಶೇಷವಾಗಿ ಎದ್ದು ಕಾಣುತ್ತವೆ.







## ಲಾರಿ ಬೇಕರರ ಶಬ್ದಗಳಲ್ಲಿ...

“ನನಗೆ ಕಂಡು ಬಂದಂತೆ ವಾಸ್ತುವಿದ್ಯೆಯೆ ಸಾಕಷ್ಟು ಜನರ ಅಗತ್ಯಗಳಿಗೆ ಉತ್ತರವೆನ್ನಬಹುದು. ನೀವು ಯಾವದೇ ಜಿಲ್ಲೆಗೆ ಭೇಟಿ ಕೊಡಿ. ಅಲ್ಲಿಯ ಪೂರ್ವಜರ ಮನೆಗಳೆಲ್ಲ ಸ್ಥಳೀಯ ವಸ್ತುಗಳನ್ನು ಉಪಯೋಗಿಸಿ ತಮ್ಮ ಸ್ವಂತ ಕೈಯಿಂದ ಕಟ್ಟಿದ್ದವು ಎಂಬುದನ್ನು ಕಾಣಬಹುದು. ಆದರೆ ದಿನ ಕಳೆದಂತೆ ಜನರು ತಮ್ಮ ಕಾರ್ಯಕುಶಲತೆಯನ್ನು ಮರೆತರು. ಆದ್ದರಿಂದಲೇ ಈಗ ಮನೆ ಕಟ್ಟಲಿಕ್ಕೆ ಹೊರಗಿನವರ ಸಹಾಯ ಪಡೆಯಬೇಕಾಗುತ್ತದೆ.

ಬಹುಶಃ ಮಹಾತ್ಮಾ ಗಾಂಧೀಜಿಯವರೇ ಲಕ್ಷಾನುಗಟ್ಟಲೇ ಜನರ ಮನೆಗಳ ಬಗ್ಗೆ ವಿಚಾರ ಮಾಡಿದ ಮೊದಲನೆಯ ಭಾರತೀಯ ನಾಯಕರಿರಬಹುದು. ಗಾಂಧೀಜಿಯವರ “ಮನೆ ಕಟ್ಟಲು ಬೇಕಾಗುವ ವಸ್ತುಗಳೆಲ್ಲ ಆ ಹಳ್ಳಿಯ 5 ಮೈಲುಗಳ ಸುತ್ತಳತೆಯಲ್ಲಿಂದಲೇ ಬಂದಿರಬೇಕು.” ಎಂಬ ವಿಧಾನ ನನಗೆ ಬಹಳ ಹಿಡಿಸುತ್ತದೆ. ಇವರ ಈ ಮೂಲಭೂತ ವಿಧಾನವೇ ನನ್ನ ಎಲ್ಲ ಕಾರ್ಯಗಳಿಗೆ ಪ್ರೇರಣೆ ಕೊಟ್ಟಿದೆ.

ಭಾರತದಂತಹ ದೇಶದಲ್ಲಿ ಹಣ, ಶಕ್ತಿ ಮತ್ತು ಅಮೂಲ್ಯವಾದ ಸಂಪನ್ಮೂಲಗಳ ಕೊರತೆ ಇದ್ದಾಗ ಅವುಗಳ ದುಂದುಗಾರಿಕೆ ಮಾಡುವದು ಎಳ್ಳಷ್ಟು ಸರಿಯಲ್ಲ

ನಾನು ಸಾಮಾನ್ಯ ಮೆಸನ್ ಮತ್ತು ಕಟ್ಟಡ ಕಾರ್ಮಿಕರಿಂದ ಸಾಕಷ್ಟು ಸಂಗತಿಗಳನ್ನು ಕಲಿತಿದ್ದೇನೆ. ಕಡಿಮೆ ವೆಚ್ಚದ ಮನೆಗಳು ಬರಿ ಬಡವರಿಗಾಗಿ ಎಂಬುದು ಬಹಳ ತಪ್ಪು. ಕಡಿಮೆ ವೆಚ್ಚ ಎಂದರೆ ಗುಣಮಟ್ಟ ಇಲ್ಲವೆ ಕಡಿಮೆ ಸೌಕರ್ಯಗಳು ಎಂದು ತಿಳಿಯಕೂಡದು. ನಾವು ಬಡತನದ ಪೂಜೆ ಮಾಡಬಾರದು.”



# ಲಾರಿ ಬೇಕರ

## ಕಾಲಕ್ರಮ

ಲಾರಿ ಬೇಕರ ವಾಸ್ತುಶಿಲ್ಪದ ಕ್ಷೇತ್ರಕ್ಕೆ ಬಹು ಅಮೂಲ್ಯವಾದ ಕೊಡುಗೆ ಕೊಟ್ಟಿದ್ದಾರೆ. ವೈಯಕ್ತಿಕ ಆಯುಷ್ಯ ಮತ್ತು ವೃತ್ತಿಪರ ಜೀವನ ಇವುಗಳ ನಡುವೆ ಒಂದು ಒಳ್ಳೆಯ ಸಮತೋಲನೆಯನ್ನು ಕಾಯ್ದುಕೊಂಡಿದ್ದರು. ಇದರಿಂದಾಗಿ ತಮ್ಮ ಕಾರ್ಯಕಲಾಪಗಳ ಗುಣಮಟ್ಟವನ್ನು ಎತ್ತರಿಸಲು ಬಹು ಸಹಾಯವಾಯಿತು. ಅವರಿಟ್ಟುಕೊಂಡ ಗುರಿ, ಅದಕ್ಕಾಗಿ ಪಡೆದ ಶ್ರಮ ಮತ್ತು ಅವರ ವೈಯಕ್ತಿಕ ಗುಣಮಟ್ಟ ಇವೆಲ್ಲವುಗಳು ಸಾಕಷ್ಟು ಜನರಿಗೆ ಪ್ರೇರಣೆ ನೀಡಿವೆ.  ಅವರ ಕಾರ್ಯ ಮತ್ತು ಜೀವನ ಪದ್ಧತಿಯನ್ನು ನಾವು ಸಹಜವಾಗಿ ಅನುಕರಿಸಬಹುದು. ಇಂದಿನ ಜಾಗತಿಕ ತಾಪಮಾನ ಏರಿಕೆ ಮತ್ತು ಕಡಿಮೆ ಕಾರ್ಬನ್ ಹೆಜ್ಜೆಗುರುತಿರುವ ಮನೆಗಳು ಅವರ ಕಾರ್ಯಪದ್ಧತಿಯನ್ನು ಮತ್ತಷ್ಟು ಬೆಳಕಿಗೆ ತಂದಿವೆ.



**1917** – ಜನ್ಮ

**1938** – ರಾಯಲ್ ಇನ್ಸ್ಟಿಟ್ಯೂಟ ಆಫ ಆರ್ಕಿಟೆಕ್ಟದ ಅಸೋಶಿಯೇಟ

**1981** – ವಿಕಸನಶೀಲ ದೇಶದಲ್ಲಿ ಕಾರ್ಯ ಮಾಡಿದ್ದಕ್ಕಾಗಿ ರಾಯಲ್ ಯುನಿವ್ವರ್ಸಿಟಿ ಆಫ ನೆದರಲ್ಯಾಂಡ್ಸದ ಡಿಲಿಟ್ ಪದವಿ

**1987** – ರಾಷ್ಟ್ರೀಯ ನಿವಾಸಸ್ಥಾನದ ಮೊದಲನೇ ಪ್ರಶಸ್ತಿ

**1988** – ಭಾರತೀಯ ನಾಗರಿಕತೆಯ ಸ್ವೀಕೃತಿ

**1990** – ಪದ್ಮಶ್ರೀ ಪ್ರಶಸ್ತಿ

**1992** – ಸಂಯುಕ್ತ ರಾಷ್ಟ್ರ ಸಂಘದ ಪರವಾಗಿ ಹ್ಯಾಬಟಾಟ ಪ್ರಶಸ್ತಿ ಮತ್ತು ರೋಲ್ ಆಫ ಆನರ್

**1992** – ಪೀಪಲ್ ಆಫ ದಿ ಇಯರ ಪ್ರಶಸ್ತಿ

**1995** – ಲಂಡನ್ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ ಪದವಿ

**2006** – ಪ್ರಿಟ್ಜ್ಲರ ವಾಸ್ತುಶಿಲ್ಪ ಪ್ರಶಸ್ತಿಗಾಗಿ ನಾಮನಿರ್ದೇಶನ

**2007** – 90ರ ವಯಸ್ಸಿನಲ್ಲಿ ಮೃತ್ಯು

# ಲಾರಿ ಬೇಕರ

“ನನಗೆ ಇಟ್ಟಿಗೆಯಲ್ಲಿ ಮನುಷ್ಯರ ಮುಖಗಳು ಕಾಣುತ್ತವೆ. ಎಲ್ಲ ಇಟ್ಟಿಗೆಗಳನ್ನು ಒಂದೇ ಮಣ್ಣಿನಿಂದ ಮತ್ತು ಒಂದೇ ಕುಲುಮೆಯಲ್ಲಿಂದ ಸುಟ್ಟು ತೆಗೆದಿದ್ದರೂ ಪ್ರತಿಯೊಂದು ಇಟ್ಟಿಗೆ ಬೇರೆಬೇರೆಯಾಗಿಯೇ ಕಾಣುತ್ತದೆ. ಪ್ರತಿ ಇಟ್ಟಿಗೆಯ ಬಣ್ಣ ಮತ್ತು ವಿನ್ಯಾಸ ಉಳಿದದ್ದಕ್ಕಿಂತ ಅನನ್ಯವಾಗಿರುತ್ತದೆ. ಆದ್ದರಿಂದಲೇ ನಾನು ಇಟ್ಟಿಗೆಯ ಗೋಡೆಗಳ ಮೇಲೆ ಪ್ಲಾಸ್ಟರ್ ಮಾಡಲು ಹಿಂಜರಿಯುತ್ತೇನೆ. ಪ್ಲಾಸ್ಟರಿಂಗ ಇದು ಕೃತ್ರಿಮ  ಮತ್ತು ವ್ಯರ್ಥ ಕೃತಿ. ಪ್ಲಾಸ್ಟರಿಂಗದಿಂದ ನಾವು ಪ್ರತಿಯೊಂದು ಇಟ್ಟಿಗೆಯನ್ನು ಕೊಂದು ಬಿಡುತ್ತೇವೆ. ಪ್ಲಾಸ್ಟರ್ ಮಾಡುವದರಿಂದ ವೆಚ್ಚ ಹೆಚ್ಚಾಗುತ್ತದೆ ಅಲ್ಲದೆ ನೋಡಲು ಕೂಡ ಅಸಹ್ಯವಾಗಿ ಕಾಣುತ್ತದೆ.”

-ಲಾರಿ



# ಲಾರಿ ಬೇಕರ

ಲಾರಿ ಬೇಕರರು ಭಾರತದ ಅತೀ ಮಹತ್ವದ ವಾಸ್ತುಶಿಲ್ಪಿಗಳಲ್ಲಿ ಒಬ್ಬರು. ಅವರು ಕಡಿಮೆ ವೆಚ್ಚದ ಮತ್ತು ಸ್ಥಳೀಯ ವಸ್ತುಗಳ ಉಪಯೋಗದ ಪ್ರವರ್ತಕರಾಗಿದ್ದರು. ಸರ್ಕಾರಿ ಇಲ್ಲವೆ ಖಾಸಗಿ ಕಟ್ಟಡಗಳಿರಲಿ, ಕಾರ್ಯಾಲಯ ಇಲ್ಲವೆ ಖಾಸಗಿ ಮನೆಯಾಗಿರಲಿ ಬೇಕರ ಇವರು ಕೈಗೆಟಕುವ ವೆಚ್ಚದಲ್ಲಿಯೇ ಅವುಗಳನ್ನು ನಿರ್ಮಿಸಲು ಹವಣಿಸುತ್ತಿದ್ದರು. ಲಾರಿ ಬೇಕರ ಇವರ ಜನ್ಮವು 1917ರಲ್ಲಿ ಇಂಗ್ಲಂಡದಲ್ಲಿ ಆಯಿತು. ಅವರು 2007ರಲ್ಲಿ ಮೃತರಾದರು. 90 ವರುಷದ ಸುದೀರ್ಘ ಆಯುಷ್ಯವನ್ನು ಅವರು ಅನುಭವಿಸಿದರು. ತಮ್ಮ 50ನೇ ವರುಷದ ವಯಸ್ಸಿನಲ್ಲಿ ವಾಸ್ತುಶಿಲ್ಪದ ವೃತ್ತಿಯನ್ನು ಪ್ರಾರಂಭಿಸಿದರು. ಬರ್ಮಿಂಗಹ್ಯಾಮ ವಿಶ್ವವಿದ್ಯಾಲಯದಲ್ಲಿ ವಾಸ್ತುಶಿಲ್ಪವನ್ನು ಅಭ್ಯಸಿಸಿದರು. ಎರಡನೇ ಮಹಾಯುದ್ಧದ ಕಾಲದಲ್ಲಿ ಅವರು ಋಗ್ಣವಾಹಿಕೆಯ ಸ್ವಯಂಸೇವಕರೆಂದು ಚೀನದಲ್ಲಿ ಯುದ್ಧಕಾರ್ಯವನ್ನು ಮಾಡಿದರು. ಚೀನದಿಂದ ಇಂಗ್ಲಂಡಿಗೆ ಮರಳುವಾಗ ಹಡಗಿನ ದಾರಿ ಕಾಯುತ್ತಿದ್ದಾಗ ಅವರು ಮುಂಬಯಿಯಲ್ಲಿ ಕೆಲ ತಿಂಗಳು ತಂಗಿದರು. ಆಗ ಅವರು ಗಾಂಧೀಜಿಯವರನ್ನು ಭೇಟಿಯಾದರು. ತಮ್ಮ ಸ್ವಂತದ ಕೈಯಿಂದ ಮಾಡಿದ ಸ್ಯಾಂಡಲ್ ಗಳನ್ನು ಕಾಣಿಕೆಯೆಂದು ಕೊಟ್ಟಾಗ ಗಾಂಧೀಜಿಯವರಿಗೆ ಬಹಳ ಆನಂದವಾಯಿತು. ಗಾಂಧೀಜಿಯವರಿಗೆ ಲಾರಿಯವರ ಕಲಾಕೌಶಲ್ಯಗಳು ಹಿಡಿಸಿದವು. “ನಿಮ್ಮಂತಹ ಜಾಣರು ಮತ್ತು ದಾರ್ಶನಿಕರು ಈ ದೇಶಕ್ಕೆ ಬೇಕು. ಮನೆ ಕಟ್ಟುವಾಗ ಸ್ಥಳೀಯ ಸಾಮಗ್ರಿ ಮತ್ತು ಕುಶಲತೆಯನ್ನು ಪೂರ್ಣವಾಗಿ ಉಪಯೋಗಿಸಬೇಕು. ಕಟ್ಟಡ ನಿರ್ಮಾಣವಾಗುತ್ತಿರುವ ಜಾಗಕ್ಕೆ ಸಮೀಪವಿರುವ 5-6 ಮೈಲುಗಳ ಸುತ್ತಳತೆಯಲ್ಲಿರುವ ವಸ್ತುಗಳನ್ನೇ ಮನೆ ಕಟ್ಟಲು ಬಳಸಬೇಕು,” ಎಂದು ಗಾಂಧೀಜಿ ಹೇಳಿದರು.

ಲಾರಿ ಬೇಕರ ಮುಂದೆ ಕೆಲ ವರುಷಗಳಾದ ಮೇಲೆ ಭಾರತಕ್ಕೆ ಮರಳಿದರು. ಭಾರತದಲ್ಲಿ ಕೈಗೆಟಕುವ ವೆಚ್ಚದಲ್ಲಿ ಕುಷ್ಠರೋಗಿಗಳಿಗಾಗಿ ಆಸ್ಪತ್ರೆ, ಖಾಸಗಿ ಮತ್ತು ಸಾರ್ವಜನಿಕ ಸಂಸ್ಥೆಗಳಿಗಾಗಿ ಕಟ್ಟಡಗಳನ್ನು ನಿರ್ಮಿಸಿದರು. 1948ರಲ್ಲಿ ಅವರು ಎಲಿಝಾಬೆಥ ಜಾಕೋಬರ ಜತೆ ಮದುವೆ ಮಾಡಿಕೊಂಡರು. ವಿವಾಹವಾದ ಮೇಲೆ ದಂಪತಿಗಳು ಪಿಥೋರಗಡದಲ್ಲಿ ನೆಲೆಸಿದರು. ಅಲ್ಲಿಯ ಆಸ್ಪತ್ರೆಯಲ್ಲಿ ಎಲಿಝಾಬೆಥ ಒಬ್ಬರೇ ಡಾಕ್ಟರರು. ಹಾಗು ಬೇಕರ ಒಬ್ಬರೇ ಸಹಾಯಕರು! ಅಮೇರಿಕೆಯ ಶಿಕ್ಷಣ ತಜ್ಞರಾದ ವೆಲ್ಧಿ ಫಿಶರ್ ಇವರಿಗಾಗಿ ಲಖನೌದಲ್ಲಿ ಲಿಟರಸಿ ಹಾವುಸ ಎಂಬ ಮೊದಲನೆ ಕಟ್ಟಡವನ್ನು ನಿರ್ಮಿಸಿದರು. ನೂರ ಮಂಝಿಲ್ ಎಂಬ ಮನೋರೋಗಿಗಳ ಆಸ್ಪತ್ರೆಯ ವಿನ್ಯಾಸ ಕೂಡ ಇವರದೇ!



Birmingham School of Architecture

ಲಾರಿ ಬೇಕರ ಇವರು ಕ್ವ್ಯಾಕರ್ ಎಂಬ ಕ್ರಿಶ್ಚಿಯನ್ ಪಂಥಕ್ಕೆ ಸೇರಿದವರು. ಈ ಪಂಥದವರು ಮೊದಲಿನಿಂದಲೂ ಧರ್ಮದ ಕಟ್ಟಳೆಗಳ ವಿರುದ್ಧ ಹೋರಾಟ ನಡೆಸಿದವರು. ಸಂಪ್ರದಾಯದ ಬಿಗಿತಗಳ ವಿರುದ್ಧ ಆಲೋಚನೆ ಮಾಡುವವರು. ಈ ಪಂಥದವರು ಸಹಿಷ್ಣುತೆ ಮತ್ತು ಅಹಿಂಸೆಗಳಲ್ಲಿ ನಂಬಿಕೆ ಇಟ್ಟವರು. ಹಾಗೆ ನೋಡಿದರೆ ಗಾಂಧೀಜಿಯವರ ವಿಚಾರ ಹಾಗು ಕ್ವ್ಯಾಕರ್ ಇವರ ನಂಬಿಕೆ ಇವುಗಳಲ್ಲಿ ಸಾಕಷ್ಟು ಹೋಲಿಕೆ ಇದೆ. 1947ರಲ್ಲಿ ವಿಶ್ವಶಾಂತಿಗಿದ್ದ ನೋಬೆಲ್ ಪ್ರಶಸ್ತಿ ಈ ಪಂಥಕ್ಕೆ ದೊರೆತಿತ್ತು.

ಬೇಕರರು ಚಿಕ್ಕಂದಿನಿಂದಲೇ ಮಿತವ್ಯಯಿಗಳು ಹಾಗು ಹಣದ ಬೆಲೆಯನ್ನು ಕಂಡುಕೊಂಡವರು. ಚಿಕ್ಕವರಿದ್ದಾಗ ಸ್ಥಳೀಯ ಬೇಕರಿಯಿಂದಲೇ ಬಿಸ್ಕಿಟು-ಬ್ರೆಡ್ ಗಳನ್ನು ತಮ್ಮ ಸ್ವಂತ ಖರ್ಚಿನ ಹಣದಿಂದ ಕೊಂಡುಕೊಳ್ಳುತ್ತಿದ್ದರು. ಇಷ್ಟೇ ಹಣದಲ್ಲಿ ಬಿಸ್ಕಿಟಿನ ತುಂಡುಗಳು ಹೆಚ್ಚು ಪ್ರಮಾಣದಲ್ಲಿ ದೊರೆಯುತ್ತವೆ ಎಂಬುದು ಗೊತ್ತಾದ ಮೇಲೆ ಅವರು ತುಂಡುಗಳನ್ನೇ ಕೊಳ್ಳತೊಡಗಿದರು. ಅಷ್ಟೇ ಅಲ್ಲದೇ ಅವು ಹೆಚ್ಚು ಸವಿಯಾಗಿದ್ದವಂತೆ! ಇವರು ಈ ಪಾಠವನ್ನು ಮುಂದೆಂದು ಮರೆಯಲಿಲ್ಲ.



1960ರಲ್ಲಿ ಬೇಕರ ಇವರು ಪತ್ನಿಯ ತವರೂರಾದ ಕೇರಳದಲ್ಲಿಯ ತಿರುವನಂತಪುರಮ್ ಕ್ಕೆ ಮರಳಿದರು. ಅಲ್ಲಿ ಅವರು ತಮ್ಮ 50ನೆಯ ವಯಸ್ಸಿನಲ್ಲಿ ವಾಸ್ತುಶಿಲ್ಪದ ವ್ಯವಸಾಯ ಮಾಡತೊಡಗಿದರು. ಭಾರತೀಯ ಸಂಪ್ರದಾಯದ ಶಿಲ್ಪಕಲೆಯ ಮಾಸ್ಟರ್ ಕುಶಲಕರ್ಮಿಯಂತೆ ಅವರು ಕೆಲಸ ಮಾಡತೊಡಗಿದರು. ಅವರು ಕೈಕೆಳಗೆ ಕೆಲಸ ಮಾಡಲು ಯಾವ ಸಹಾಯಕರನ್ನು ಕೂಡ ನೇಮಿಸಲಿಲ್ಲ. ತಾವು ಕಟ್ಟಬೇಕಾದ ಕಟ್ಟಡಗಳ ಆಕೃತಿಗಳನ್ನು ಕೂಡ ಉಪಯೋಗಕ್ಕೆ ಬಾರದ ಹಾಳೆಗಳ ಮೇಲೆ – ಅದು ಕೂಡ ಕಟ್ಟಡ ಕಟ್ಟುವ ಜಾಗದ ಮೇಲೆಯೆ – ತೆಗೆಯುತ್ತಿದ್ದರು. ಇವರ ಯೋಜನೆಗಳನ್ನು ಕಾರ್ಯಾನ್ವಿತಗೊಳಿಸಲು ಇಂಜಿನಿಯರುಗಳು ಬೇಕಾಗಿರಲಿಲ್ಲ. ಅವರೇ ತರಬೇತಿ ಕೊಟ್ಟ ಕುಶಲಕರ್ಮಿಗಳ ತಂಡವು ಎಲ್ಲ ಕೆಲಸಗಳನ್ನು ಮಾಡುತ್ತಿತ್ತು. ಇವರೇ ಸ್ವಂತ ನಿಂತು ಕೆಲಸ ಮಾಡುತ್ತಿದ್ದರಿಂದ ಮಿಡಲ್ ಮೇಲ್ವಿಚಾರಕರ ಅವಶ್ಯಕತೆ ಇರಲಿಲ್ಲ. ಅಲ್ಲದೇ ವೆಚ್ಚದಲ್ಲಿ ಕೂಡ ಸಾಕಷ್ಟು ಉಳಿತಾಯವಾಗುತ್ತಿತ್ತು. ಇವರಿಗೆ ಪರಿಸರ ರಕ್ಷಣೆಯಲ್ಲಿ ಆಸಕ್ತಿ ಇದ್ದುದರಿಂದ ಊರ್ಜೆಯನ್ನು ಹಾಳು ಮಾಡುವ ಸ್ಟೀಲ ಮತ್ತು ಸಿಮೆಂಟುಗಳನ್ನು ಹೆಚ್ಚು ಪ್ರಮಾಣದಲ್ಲಿ ಉಪಯೋಗಿಸುತ್ತಿರಲಿಲ್ಲ. “ಸಿಮೆಂಟಿನ ವಯಸ್ಸು ನನಗಿಂತಲೂ ಕಡಿಮೆ. ಆದರೆ ಜನರು ಎಷ್ಟೋ ಶತಮಾನಗಳಿಂದ ಸ್ಥಳೀಯ ಸಾಮಗ್ರಿಗಳನ್ನೇ ಉಪಯೋಗಿಸಿ ಮನೆ ಕಟ್ಟುತ್ತಿದ್ದಾರೆ.” ಎಂದು ಅವರು ಯಾವಾಗಲೂ ಹೇಳುತ್ತಿದ್ದರು.



ಬೇಕರ ತಾವು ಕಟ್ಟತೊಡಗಿದ್ದ ಕಟ್ಟಡದ ಜಾಗಕ್ಕೆ ಮೇಲಿಂದ ಮೇಲೆ ಭೆಟ್ಟಿ ಕೊಡುತ್ತಿದ್ದರು. ಒಂದು ದಿನ ಯಾವದೋ ಕಾರಣದಿಂದಾಗಿ ಅವರ ಕೈಕೆಳಗೆ ಕೆಲಸ ಮಾಡುತ್ತಿರುವ ಮೇಸನ್ನಿನ ಮೇಲೆ ಅವರಿಗೆ ಸಿಟ್ಟು ಬಂದಿತು. ಸಿಟ್ಟು ತಾಳಲಾರದೆ ಅವನನ್ನು ತರಾಟೆಗೆ ತೆಗೆದುಕೊಂಡರು. ಮನೆಗೆ ಮರಳಿ ಹೋದಾಗ ತಮ್ಮ ಈ ಕೃತಿಯ ಬಗ್ಗೆ ಅರಿವಾಗಿ ಕೂಡಲೆ ಮೇಸನ್ನಿಗೆ ಕ್ಷಮೆ ಯಾಚಿಸುವ ಪತ್ರವನ್ನು ಬರೆದು ಕ್ಷಮೆ ಕೇಳಿದರು.

“ರವಿವಾರದ ಬಿಡುವಿನ ದಿನ ನಮ್ಮ ಪಾಲಕರು ನಮ್ಮನ್ನು ಹೊರಗೆ ಆಡಲು ಬಿಡುತ್ತಿರಲಿಲ್ಲ. ನನ್ನ ಅಣ್ಣ ನನಗಿಂತ 10 ವರುಷ ಹಿರಿಯ. ಅವನಿಗೆ ಈ ರೀತಿಯ ಕಟ್ಟಪ್ಪಣೆ ಸೇರುತ್ತಿರಲಿಲ್ಲ. ನನ್ನ ಅಣ್ಣ ಎಲ್ಲರ ಕಣ್ಣು ತಪ್ಪಿಸಿ ಮೆಲ್ಲಗೆ ಹೊರಬಿದ್ದು ಟೆನಿಸ ಆಡಲು ಹೋಗುತ್ತಿದ್ದನು. ಆತನೇ ನನ್ನ ಹಿರೋ. ನಾವು ಒಳ್ಳೆಯ ನಡತೆಗಳನ್ನು ಪಾಲಿಸಬೇಕು ಆದರೆ ಕೆಟ್ಟ ನಡತೆಗಳನ್ನು ವಿರೋಧಿಸಲೇಬೇಕು ಎಂಬ ಪಾಠವನ್ನು ನಾನು ನನ್ನ ಅಣ್ಣನಿಂದ ಕಲಿತೆ.”

-ಲಾರಿ

ಬೇಕರ ಇವರು ಅತೀ ಸಾಮಾನ್ಯ ಕೆಲಸಗಾರರಿಗೂ ತಿಳಿಯುವಂತೆ ಕಟ್ಟಡ ರಚನೆಯ ಆಕೃತಿಯನ್ನು ತೆಗೆಯುತ್ತಿದ್ದರು. ಕೇರಳದಲ್ಲಿ ಸಾಕಷ್ಟು ವರುಷ ವಾಸವಾಗಿದ್ದರೂ ಕೂಡ ಅವರಿಗೆ ಮಲಯಾಳಿ ಭಾಷೆ ಅಷ್ಟು ಸರಿಯಾಗಿ ಬರುತ್ತಿರಲಿಲ್ಲ. ಕೇವಲ ನೀರು, ನಾಳೆ, ಕಟ್ಟಡ ಸಾಮಗ್ರಿ, ಒಂದು-ಎರಡು..ಅಂಕಿ-ಸಂಖ್ಯೆ ಇಂತಹ ಶಬ್ದಗಳನ್ನಷ್ಟೆ ಅವರು ಆಡಬಲ್ಲರು. ಆದರೆ ಅವರಿಗೆ ಹಿಂದಿ ಭಾಷೆ ಚೆನ್ನಾಗಿ ಬರುತ್ತಿತ್ತು.
ಅವರ ಭಾರತದ ನಾಗರಿಕತೆಯ ವಿನಂತಿ ಪತ್ರ ಎಷ್ಟೋ ವರುಷಗಳಿಂದ ಸರ್ಕಾರದ ಹತ್ತಿರ ಇತ್ಯರ್ಥವಾಗದೆ ಬಿದ್ದಿತ್ತು. ಕೊನೆಗೆ 1988ರಲ್ಲಿ ಅವರಿಗೆ ಭಾರತದ ನಾಗರಿಕತ್ವ ದೊರೆಯಿತು. ಆದ್ದರಿಂದ ಅವರಿಗೆ ಬಹು ಆನಂದವಾಯಿತು. ಕಾರಣ ಈ ಮೊದಲು ಸಮೀಪದ ಪೋಲೀಸ ಸ್ಟೇಶನ್ನಿಗೆ ಪ್ರತಿ ಮೂರು ತಿಂಗಳಿಗೆ ಹೋಗಿ ವಿವರಗಳನ್ನು ಕೊಡುವದು ಮುಗಿಯಿತೆಂಬ ಖುಶಿ.
ಅವರು ಹಿಮಾಲಯದಲ್ಲಿ ಇದ್ದಾಗ ಭಾರತದ ವಾಸ್ತುಶಿಲ್ಪವನ್ನು ಪೂರ್ಣವಾಗಿ ತಿಳಿದುಕೊಂಡಿದ್ದರು. ಸಾವಿರಾರು ವರುಷಗಳ ಹಿಂದಿನ, ಮತ್ತೇ ಮತ್ತೆ ಪ್ರಯತ್ನಿಸಿ ಶೋಧಿಸುತ್ತ ಹೋದ ಮತ್ತು ವೆಚ್ಚವನ್ನು ಸಾಕಷ್ಟು ಕಡಿಮೆ ಮಾಡುವ ಈ ಸಂಪ್ರದಾಯ ಅವರ ಮನ ಸೆಳೆದಿತ್ತು. ಜನರೆಲ್ಲ ಮನೆ ಕಟ್ಟುವಾಗ ಸುತ್ತಮುತ್ತಲು ದೊರೆಯುವ ಸಾಮಗ್ರಿಗಳನ್ನೇ ಉಪಯೋಗಿಸುತ್ತಿದ್ದರು. ಇದನ್ನೆಲ್ಲ ನೋಡಿದಾಗ ಅವರಿಗೆ ಗಾಂಧೀಜಿಯವರ ನೆನಪು ಬರುತ್ತಿತ್ತು. – ಕಟ್ಟಡಗಳೆಲ್ಲ 5 ಮೈಲು ಸುತ್ತಳತೆಯಲ್ಲಿದ್ದ ವಸ್ತುಗಳಿಂದ ಕಟ್ಟಿರಲಿ.
ಬೇಕರ ಇವರಿಗೆ ಕೆಲವು ಸಲ ಈ ತತ್ವವನ್ನು ಪಾಲಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಇದಕ್ಕೆ ಸಮೀಪವಾಗಿರಲು ಪ್ರಯತ್ನಿಸುತ್ತಿದ್ದರು. ಗೋಡೆಗಳ ಮೇಲೆ ಬಣ್ಣ-ಬಣ್ಣದ ಬಾಟಲಿಗಳನ್ನು ಅಂಟಿಸಿ ಕ್ಯಾಲಿಡೋಸ್ಕೋಪ ತರಹದ ವರ್ಣವಿನ್ಯಾಸವನ್ನು ರಚಿಸುವದು, 25% ಇಟ್ಟಿಗೆಗಳ ಉಳಿತಾಯ ಮಾಡುವ ಇಲಿಗಳನ್ನು ಹಿಡಿಯುವ ಬಲೆಗಳ ತರಹದ ಇಟ್ಟಿಗೆಗಳ ಜಾಳಿಗೆಯ ರಚನೆ ಮಾಡುವದು ಅವರ ವೈಶಿಷ್ಟ್ಯವಾಗಿತ್ತು. ಅವರು ರಚಿಸಿದ ಇಟ್ಟಿಗೆಯ ಜಾಳಿಗೆ ತಣ್ಣಗಿನ ಗಾಳಿಯನ್ನು ಒಳತರಲು ಹಾಗು ಬಿಸಿ ಗಾಳಿಯನ್ನು ಹೊರಗೆ ಅಟ್ಟಲು ಸರಿಯಾಗಿತ್ತು. ಗಾರೆಗಾಗಿ ಅವರು ಸುಣ್ಣವನ್ನೇ ಉಪಯೋಗಿಸುತ್ತಿದ್ದರು. ಮನೆಗಳ ಮೇಲಿನ ಚಪ್ಪರಕ್ಕಾಗಿ ದುಬಾರಿ ಬೆಲೆಯ ಕಬ್ಬಿಣಕ್ಕಿಂತ ಬಿದಿರನ್ನೇ ಅವರು ಉಪಯೋಗಿಸಿದರು. ಇದರಿಂದಾಗಿ ಕಟ್ಟಡದ ವೆಚ್ಚದಲ್ಲಿ 20% ಉಳಿತಾಯವಾಗುತ್ತಿತ್ತು.
ಗ್ರಾಮೀಣ ಕ್ಷೇತ್ರಗಳಲ್ಲಿ ಮನೆ ಕಟ್ಟಲಿಕ್ಕೆ ದೊಡ್ಡ ಗಾತ್ರದ ಸಲಕರಣೆ-ಯಂತ್ರಗಳು ದೊರೆಯಲಾರವು. ಜನರೆಲ್ಲ ತಮ್ಮ ಮನೆಗಳನ್ನು ಸ್ಥಳೀಯವಾಗಿ ದೊರೆಯುವ ಕಲ್ಲು, ಮಣ್ಣು, ಕಟ್ಟಿಗೆ ಮಂತಾದವುಗಳಿಂದಲೇ ಮತ್ತು ತಮ್ಮ ಕೈಯಿಂದಲೇ ಕಟ್ಟುತ್ತಾರೆ. ಬೇಕರ ಇವರಿಗೆ ಪರಿಸರಪ್ರಿಯವಾದ, ಅಂದವನ್ನು ಹೆಚ್ಚಿಸುವ ಹಳ್ಳಿಗಳಲ್ಲಿಯ ಮನೆಗಳೇ ಬಹು ಪ್ರಿಯವಾಗಿದ್ದವು.

"ನಾನು ಯಾರ ಮನೆಯನ್ನು ಕಟ್ಟಬೇಕಾಗಿದೆಯೋ ಅವರ ಮನೆಯ ಸುತ್ತಮುತ್ತಲಿನ ಪರಿಸರದ ಪೂರ್ಣ ಪರಿಚಯ ಮಾಡಿಕೊಳ್ಳುತ್ತೇನೆ. ಅವರು ಅಡಿಗೆ ಹೇಗೆ ಮಾಡುವರು, ಅವರು ಏನು ತಿನ್ನುತ್ತಾರೆ, ಒಬ್ಬರೇ ಊಟ ಮಾಡುತ್ತಾರೆಯೋ ಇಲ್ಲವೇ ಎಲ್ಲರ ಜೊತೆಯೋ, ಅವರು ಮಲಗುವ ಕೋಣೆ ಹೇಗೆ ಕಾಣುತ್ತದೆ, ಕೆಲಸ ಮಾಡುವಾಗ, ಹೊಲಿಯುವಾಗ, ಓದುವಾಗ ಅವರಿಗಿರುವ ಸೌಕರ್ಯಗಳು ಯಾವವು. ನಾನು ಇಂತಹ ಚಿಕ್ಕ ಪುಟ್ಟ ವಿವರಗಳನ್ನು ಕಲೆ ಮಾಡುವದರಲ್ಲಿ ಸಾಕಷ್ಟು ವೇಳೆ ತೆಗೆದುಕೊಳ್ಳುತ್ತೇನೆ."

-ಲಾರಿ




ಶಾಲೆಗಳಲ್ಲಿ ಲಾರಿ ಅಷ್ಟೊಂದು ಚುರುಕಾಗಿರಲಿಲ್ಲ. ಆದರೆ ಅವರಿಗೆ ಚಿತ್ರ, ರೂಪರೇಖೆ ಮತ್ತು ಆಕೃತಿಗಳನ್ನು ಬಿಡಿಸುವದರಲ್ಲಿ ಬಹು ಆಸಕ್ತಿ. ಶಾಲೆಯ ಶಿಕ್ಷಣ ಮುಗಿಸಿದ ಮೇಲೆ ಗೆಳೆಯನ ಸೂಚನೆಯಂತೆ ಅವರು ವಾಸ್ತುಶಿಲ್ಪದ ಕಾಲೇಜನ್ನು ಸೇರಿದರು. ಕಾಲೇಜಿನ ಪ್ರಿನ್ಸಿಪಾಲರಿಗೆ ಬೇಕರರ ಕೆಲಸ ಸೇರಿದ್ದರಿಂದ ಅವರಿಗೆ ಕೂಡಲೆ ಪ್ರವೇಶ ಕೊಟ್ಟರು. ಕಾಲೇಜಿನಲ್ಲಿ ಅವರು ಲಲಿತ ಕಲೆಯ ಪ್ರಕಾರಗಳನ್ನು ಕಲಿತರು. ಕಲ್ಲುಗಳಲ್ಲಿಂದ ಮೂರ್ತಿಶಿಲ್ಪಗಳನ್ನು ಮಾಡುವದು, ಮಣ್ಣು, ಪಿಂಗಾಣಿಗಳಿಂದ ಕಲಾಕೃತಿಗಳನ್ನು ರಚಿಸುವದು, ಸಂಗೀತ ಮುಂತಾದವುಗಳನ್ನು ಅವರು ಅಲ್ಲಿ ಕಲಿತರು. ಇದೆಲ್ಲ ಅವರ ಭವಿಷ್ಯಕಾಲದ ಕೆಲಸಕ್ಕೆ ತಳಹದಿಯಾಯಿತು.

ಲಾರಿ ಬೇಕರ ಇವರನ್ನು ಒಮ್ಮೆ ದಿಲ್ಲಿಯಲ್ಲಿ ಜರುಗುವ ವಾಸ್ತುಶಿಲ್ಪದ ಸಂಕೀರಣಕ್ಕಾಗಿ ಕರೆಕಳಿಸಿದ್ದರು. ಬಡವರಿಗಾಗಿ ಮನೆಗಳು ಎಂಬ ಕಾರ್ಯಸೂಚಿಯ ಬಗ್ಗೆ ವಿಚಾರ ವಿನಿಮಯ ಮಾಡಬೇಕಾಗಿತ್ತು. ಇದಕ್ಕಾಗಿ ಆಯೋಜಕರು ಹೋಗುಬರುವ ವಿಮಾನ ಪ್ರವಾಸದ ವೆಚ್ಚ, ಇರಲಿಕ್ಕೆ ಬಹುಬೆಲೆಯ ಹೋಟಲ್ಲಿನಲ್ಲಿ ವ್ಯವಸ್ಥೆ ಮುಂತಾದ ಸೌಕರ್ಯಗಳನ್ನು ಕೊಡುವವರಿದ್ದರು. ಬೇಕರ ತಮಗೆ ಬರಲು ಸಾಧ್ಯವಿಲ್ಲ ಎಂದು ಆಯೋಜಕರಿಗೆ ತಿಳಿಸಿದರು. ವಿಮಾನ ಪ್ರವಾಸದ ಮತ್ತು ಇರಲಿಕ್ಕೆ ವ್ಯವಸ್ಥೆ ಮಾಡಿದ ಹೋಟಲ್ಲುಗಳ ವೆಚ್ಚದಲ್ಲಿ ಒಬ್ಬ ಬಡವನ ಮನೆ ಕಟ್ಟಿ ಮುಗಿಸಬಹುದು ಎಂಬುದು ಅವರ ಎಣಿಕೆ. ಇದನ್ನೆಲ್ಲ ಅವರು ಬರೆದು ತಿಳಿಸಿದರು. ದಿಲ್ಲಿಗೆ ಪ್ರವಾಸ ಮಾಡುವ ಬದಲಾಗಿ ಮನೆ ಕಟ್ಟುವಾಗ ಉಳಿತಾಯ ಹೇಗೆ ಮಾಡಬೇಕು? ಎಂಬುದರ ಒಂದು ಚಿತ್ರಮಯ ಕೈಪಿಡಿಯನ್ನೇ ಅವರು ಬರೆದು ಸ್ವಂತ ವೆಚ್ಚದಿಂದ ಪ್ರಕಟಿಸಿದರು. ಈ ಕೈಪಿಡಿಯ ಹೆಸರು **COSTFORD.**




ಬೇಕರ ಇವರು ಸಾಂಪ್ರದಾಯಿಕ ಕಟ್ಟಡಗಳನ್ನು ಅಭ್ಯಸಿಸಿ ಅವುಗಳ ವಿವರಗಳನ್ನು ಬರೆದಿಡುತ್ತಿದ್ದರು. ಈ ಮೊದಲಿನ ಕಟ್ಟಡಗಳೆಲ್ಲ ಪರಿಸರ ರಕ್ಷಣೆ ಮಾಡುವ ಮತ್ತು ದೀರ್ಘಕಾಲ ಬಾಳಿದ ವಾಸ್ತುಗಳಾಗಿವೆ. ಬೇಕರ ಇವರಿಗೆ ಇಂತಹ ಕಟ್ಟಡಗಳೆಲ್ಲ ಭವಿಷ್ಯದಲ್ಲಿ ರಚನೆ ಮಾಡುವ ದೃಷ್ಟಿಯನ್ನು ಕೊಟ್ಟವು. "ವಾಸ್ತುಶಿಲ್ಪಿಗಳ ಕೈಯಲ್ಲಿ ವಾಸ್ತುಶಿಲ್ಪಗಳನ್ನು ಕೊಡಕೂಡದು," ಎಂಬುದು ಅವರಿಗೆ ಮನವರಿಕೆಯಾಗಿತ್ತು. ಹೀಗಾಗಿ ಅವರೇ ತೆಗೆದ ರೂಪರೇಖೆ ಮತ್ತು ಆಕೃತಿಗಳಿದ್ದ **How to Reduce Building Costs?, Rubbish, Mud** ಮುಂತಾದ ಕಿರುಹೊತ್ತಿಗೆಗಳು ಪ್ರಕಾಶಿತವಾದವು. ಅವರು ನಿರ್ಮಿಸಿದ **Centre for Development Studies**ದ ಕಟ್ಟಡ, ಹಾಗು ತಿರುವನಂತಪುರಮ್‌ದ ಬಸ್ ನಿಲ್ದಾಣದ ಬಳಿ ಕಟ್ಟಿದ **Coffee House**ದ ಕಟ್ಟಡ ಅವರ ಅಪ್ರತಿಮ ಕೃತಿಗಳ ಸಾಕ್ಷಿಯಾಗಿ ನಿಂತಿವೆ. ಅವರಿಗೆ ಯಾವಾಗಲೂ ಕೇರಳದ ತೆಂಗಿನ ಮರಗಳಿಗಿಂತ ತಮ್ಮ ಕಟ್ಟಡ ಎತ್ತರವಾಗಿರಬಾರದು ಎಂದೆನ್ನಿಸುತ್ತಿತ್ತು. ಎಷ್ಟೇ ತೊಂದರೆಗೆ ಈಡಾದರೂ ಬೇಕರರು ಮುಗುಳು ನಗುತ್ತ ಏನಾದರೊಂದು ಪರಿಹಾರವನ್ನು ಕಂಡು ಹಿಡಿಯುತ್ತಿದ್ದರು. ಅವರು ನಿರ್ಮಿಸಿದ ಕೇರಳದಲ್ಲಿಯ 'ಬೇಕರ ಶೈಲಿ'ಯ ಕಟ್ಟಡಗಳಿಗಿಂತ ಗುಜರಾತ, ಉತ್ತರ ಪ್ರದೇಶ ಮತ್ತು ಬಂಗಾಲದಲ್ಲಿಯ ಕಟ್ಟಡಗಳು ಬೇರೆ ತರಹವಾಗಿ ಕಾಣುತ್ತವೆ.



"ಬಡಜನರು ತಮ್ಮ ಕೈಯಿಂದಲೇ ತಮ್ಮ ತಮ್ಮ ಮನೆಗಳನ್ನು ಕಟ್ಟಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ನಾನು ಹೊಸ ಹೊಸ ವಸ್ತುಗಳನ್ನು ಉಪಯೋಗಿಸಿ ಮನೆಗಳನ್ನು ಚೆಂದಾಗಿ ಇಟ್ಟಿದ್ದನ್ನು ನೋಡಿದ್ದೇನೆ. ಸುಲಭವಾಗಿ ದೊರೆಯುವ ಕಲ್ಲು, ಮಣ್ಣು, ಹುಲ್ಲು, ಬಿದಿರು ಇಂತಹ ವಸ್ತುಗಳಿಂದ ತಯಾರಿಸಿದ ಅವರ ಮನೆಯ ಗೋಡೆಗಳನ್ನು, ಅವರ ಸೌಂದರ್ಯ ದೃಷ್ಟಿಯನ್ನು ಹಾಗು ಕಾರ್ಯಕುಶಲತೆಯನ್ನು ಎಷ್ಟು ಹೊಗಳಿದರೂ ಸಾಲದು."

-ಲಾರಿ








Bullock-cart running on Solar Energy

(Cartoon by Laurie Baker)

ಎಷ್ಟೋ ತಜ್ಞರು ಬೇಕರ ಇವರ ಕಾರ್ಯವಿಧಾನವನ್ನು ಟೀಕಿಸುತ್ತಿದ್ದರು. ಆದರೆ ಲಾರಿ ಬೇಕರ ಇವರು ಇಂತಹರ ಜತೆ ವಾದವಿವಾದ ಮಾಡುತ್ತಿರಲಿಲ್ಲ. ಅತೀ ಸಾಮಾನ್ಯರಿಗಾಗಿ ಅಂದ-ಚೆಂದದ, ಕಡಿಮೆ ವೆಚ್ಚದ ಮನೆ ನಿರ್ಮಿಸುವದರಲ್ಲಿ ತಮ್ಮ ಶಕ್ತಿಯನ್ನು ಕೇಂದ್ರಿಕರಿಸುತ್ತಿದ್ದರು. ಅವರ ಎಷ್ಟೋ ಲೇಖನಗಳಲ್ಲಿ ದಿನದಿನಕ್ಕೆ ಕಡಿಮೆಯಾಗುತ್ತಿರುವ ಸಾಮಾಜಿಕ ಮಟ್ಟದ ಬಗೆಗಿನ ಚಿಂತೆ ವ್ಯಕ್ತವಾಗುತ್ತಿತ್ತು. ಇದಕ್ಕಾಗಿ ಯಾವ ಪರ್ಯಾಯಗಳಿವೆ ಎಂಬುದನ್ನು ಕೂಡ ಅವರು ವಿಷದೀಕರಿಸುತ್ತಿದ್ದರು.

ಲಾರಿ ಕೇವಲ ವಾಸ್ತುಶಿಲ್ಪಿಗಳಾಗಿರಲಿಲ್ಲ. ಆಯುಷ್ಯದ ವಿವಿಧ ಪ್ರಸಂಗಗಳನ್ನು ಧೈರ್ಯದಿಂದ ಎದುರಿಸಿ ಪೂರ್ಣ ಆಯುಷ್ಯವನ್ನು ಆನಂದಿಸಿ ಮುಗಿಸಿದರು. ಅರಿವಳಿಕೆಕಾರ, ತೋಟಗಾರ, ಇಗರ್ಜಿಯ ಪಾದ್ರಿ, ಅಡಿಗೆ ಮಾಡುವವ, ಪಶುಗಳ ಆರೈಕೆ ಮಾಡುವವ, ಋಗ್ಣವಾಹಿಕೆಯ ಡ್ರಾಯವ್ಹರ, ಬಡಿಗ, ಮೇಸನ್, ಕವಿ, ವ್ಯಂಗಚಿತ್ರಕಾರ ಮುಂತಾದ ಹಲವಾರು ಪಾತ್ರಗಳನ್ನು ಪ್ರಸಂಗಕ್ಕೆ ಅನುಸರಿಸಿದಂತೆ ವಹಿಸಿಕೊಳ್ಳುತ್ತಿದ್ದರು. ಅವರ ವ್ಯಂಗಚಿತ್ರಗಳಲ್ಲಿ ಸರಳವಾದ ಆದರೂ ಪರಿಪೂರ್ಣವಾದ ಜೀವನದ ಆಶಯ ಕಂಡುಬರುತ್ತವೆ. ಬೇಕರ ಸ್ವಂತದ ಆಯುಷ್ಯದಲ್ಲಿ ಸಾಕಷ್ಟು ಏರಿಳಿತಗಳನ್ನು ಕಂಡರು. 1988 ರಲ್ಲಿ ಭಾರತೀಯ ನಾಗರಿಕತೆ ಅವರಿಗೆ ದೊರೆತಿದ್ದರೂ ಗಾಂಧೀಜಿಯವರನ್ನು ಭೆಟ್ಟಿಯಾದ ದಿನಂದಿಂದಲೇ ಅವರು ಭಾರತೀಯರಾಗಿದ್ದರು.

ಬೇಕರ ಇವರಿಗೆ ಇಡೀ ಆಯುಷ್ಯದಲ್ಲಿ ಸಾಕಷ್ಟು ಗೌರವ ಡಾಕ್ಟರೇಟ ಪದವಿಗಳು ದೊರೆತಿದ್ದವು. ಬ್ರಿಟಿಶ ಶಾಸನವು ಅವರಿಗೆ **Order of the British Empire** ಮತ್ತು **MBE** ಕೊಟ್ಟು ಗೌರವಿಸಿತು. ಅವರಿಗೆ ಸಂಯುಕ್ತ ರಾಷ್ಟ್ರಸಂಘದ ಡಾಕ್ಟರೇಟ ಪ್ರಶಸ್ತಿ ದೊರೆಯಿತು. 1990ರಲ್ಲಿ ಪದ್ಮಶ್ರೀ ಪ್ರಶಸ್ತಿ ಕೊಟ್ಟು ಅವರನ್ನು ಗೌರವಿಸಲಾಯಿತು. ಈ ಎಲ್ಲ ಪದವಿ ಮತ್ತು ಪ್ರಶಸ್ತಿಗಳಿಗಿಂತ 1988ರಲ್ಲಿ ದೊರೆತ ಭಾರತೀಯ ನಾಗರಿಕತ್ವ ಅವರಿಗೆ ಸಾಕಷ್ಟು ಸಮಾಧಾನ ಕೊಟ್ಟಿತು. ಎಲಿಝಾಬೆಥ ಮತ್ತು ಬೇಕರ ಇವರು ತಿಲಕ ಎಂಬ ಗಂಡುಮಗು ಮತ್ತು ವಿದ್ಯಾ ಎಂಬ ಹೆಣ್ಣುಮಗುವನ್ನು ದತ್ತು ತೆಗೆದುಕೊಂಡು ಬೆಳೆಸಿದರು.

ಲಾರಿ ಬೇಕರ 90 ವರುಷದವರಿದ್ದಾಗ 2007, ಎಪ್ರಿಲ್ 1 ರಂದು ಮೃತ್ಯುವನ್ನು ಅಪ್ಪಿದರು. ಅವರ ಮೃತ್ಯುದಿವಸ ಕೂಡ ಅವರ ವಿರೋಧಿಗಳನ್ನು ಅಣಕಿಸಿರಲು ಸಾಕು!

You need half a brick?

Then why are you breaking a full brick. By doing this you are wasting money, time and energy.



Just look down below. From there pick up a half brick and continue working.






This house is made of bricks and mud. This house is multi-storied and the shade of the coconut trees keeps it cool.



This house is made of bricks and mud. Isn't it beautiful?

"ಭಾರತ ದೇಶದಲ್ಲಿ 2 ಕೋಟಿ ಕುಟುಂಬಗಳಿಗೆ ಸ್ವಂತದ ಮನೆ ಇಲ್ಲ. ಮನೆ ನಿರ್ಮಾಣದಲ್ಲಿ ಕೆಲಸ ಮಾಡುತ್ತಿರುವವರು ಈ ಸಮಸ್ಯೆಯ ಬಗ್ಗೆ ಗಂಭೀರವಾಗಿ ಯೋಚಿಸಬೇಕು. ಈ ಸಾಮಾನ್ಯರಿಗಾಗಿ ಕಡಿಮೆ ವೆಚ್ಚದ, ಅಂದದ ಮನೆಗಳನ್ನು ಕಟ್ಟುವದಕ್ಕಾಗಿ ಪ್ರಯತ್ನಿಸಬೇಕು. ಇದೆಲ್ಲ ಶಕ್ಯವಾಗಬಹುದು. ಆದರೆ ಅದಕ್ಕಾಗಿ ಪರ್ಯಾಯದ ದೃಷ್ಟಿ ಬೇಕು. ಅಲ್ಲದೆ ಕೊಳಚೆ ನೀರಿನ ಮರುಬಳಕೆಗಾಗಿ ಯೋಚಿಸಬೇಕು. ನಮ್ಮ ದೇಶದ ಬಹುತಾಂಶ ಪ್ರದೇಶಗಳಿಗೆ ಮೂಲಭೂತ ಸೌಕರ್ಯಗಳು ದೊರೆತಿಲ್ಲ. ಬಡವರಿಗೆ ಸಹಾಯ ಮಾಡುವದರ ಬಗ್ಗೆ ಗಂಭೀರವಾಗಿ ಆಲೋಚಿಸುತ್ತಿದ್ದರೆ ಅದಕ್ಕಾಗಿ ಈಕಡೆ ನೋಡುವ ನಮ್ಮ ದೃಷ್ಟಿಯನ್ನು ಬದಲಿಸಬೇಕು. ಇದಾದರೇನೆ ಹೊಸ ಮತ್ತು ಬೇರೆ ರೀತಿಯ ಪರಿಹಾರ ದೊರೆಯಬಹುದು!

ಇಟ್ಟಿಗೆಗಳಿಂದ ಮನೆ ಕಟ್ಟಿಯಾದ ಮೇಲೆ ಸಿಮೆಂಟಿನಿಂದ ಅದಕ್ಕೆ ಪ್ಲಾಸ್ಟರ ಮಾಡುತ್ತೇವೆ. ಇದು ಇಟ್ಟಿಗೆಯ ಮನೆ ಎಂದು ಜನರಲ್ಲಿ ಡಂಗುರ ಸಾರಲು ಆ ಪ್ಲಾಸ್ಟರ ಮೇಲೆ ಇಟ್ಟಿಗೆ ಚಿತ್ರ ಬರೆದು ಆ ಚಿತ್ರಕ್ಕೆ ಇಟ್ಟಿಗೆ ಬಣ್ಣ ಬಳೆಯುತ್ತೇವೆ. ಇದಕ್ಕಿಂತ ಹೆಚ್ಚು ಮೂರ್ಖತನ ಮತ್ತೇ ಯಾವದಿರಬಹುದು! ನಿಮಗೆ ನಿಜವಾಗಿ ಬಣ್ಣ ಹಚ್ಚಬೇಕಿದ್ದರೆ ಗೋಡೆಗೆ ಅದನ್ನು ಜೋತು ಬಿಡಿ ಇಲ್ಲವೇ ಬೇರೊಂದು ಶಿಲ್ಪಕ್ಕೆ ಬಣ್ಣ ಹಚ್ಚಿ. ಏಕೆಂದರೆ ಬಣ್ಣವನ್ನು ಸಮೀಪದಿಂದ ನೋಡಿದರೇನೆ ಅದು ಚಂದ ಕಾಣುವದು! ಆದರೆ ಮನೆ ಮತ್ತು ಗೋಡೆಗಳನ್ನು ಅಷ್ಟೊಂದು ಸಮೀಪದಿಂದ ನೋಡಲು ಸಾಧ್ಯವಿಲ್ಲ. ಜನಸಾಮಾನ್ಯರು ನೋಡಿದಾಗ ಅವರಿಗೆ ಆನಂದ ಕೊಡುವ, ಕಣ್ಣಿಗೆ ಚಂದ ಕಾಣುವ ಕಟ್ಟಡಗಳನ್ನು ನಿರ್ಮಿಸಬೇಕು."



“ಭಾರತೀಯರ ಎಷ್ಟೋ ಮನೆಗಳಿಗೆ ಜಾಳಿಗೆಯ ರಚನೆ ಇರುವ ಗೋಡೆಗಳು ಇರುತ್ತವೆ. ನನ್ನ ರಚನೆಗಳ ಮೇಲೆ ಇದರ ಪರಿಣಾಮ ಸಾಕಷ್ಟು ಪ್ರಮಾಣದಲ್ಲಿ ಆಗಿದೆ. ಹಾಗು ಈ ರಚನೆ ಕೌಶಲ್ಯವನ್ನು ನಾನು ಚೆನ್ನಾಗಿ ಅಳವಡಿಸಿಕೊಂಡಿದ್ದೇನೆ. ಜಾಳಿಗೆಯಂತಹ ಗೋಡೆಯ ರಚನೆ ವೆಚ್ಚವನ್ನು ಕಡಿಮೆ ಮಾಡುತ್ತದೆ ಅಲ್ಲದೆ ಮನೆಯ ಅಂದವನ್ನು ಹೆಚ್ಚಿಸುತ್ತದೆ. ಇಟ್ಟಿಗೆಯ ಜಾಳಿಗೆಗಳು ತಂಪು ಗಾಳಿಯನ್ನು ಒಳತರುತ್ತವೆ ಮತ್ತು ಬಿಸಿ ಗಾಳಿಯನ್ನು ಹೊರಚೆಲ್ಲುತ್ತವೆ. ಬಿಸಿಲುಗಾಲದಲ್ಲಿ ಬಿಸಿ ಗಾಳಿಯು ಬಹು ಅಹಿತಕರ ಅಲ್ಲದೆ ಅಸಮಾಧಾನ ಉಂಟು ಮಾಡುವದು. ಬಾಗಿಲು ಮತ್ತು ಕಿಟಕಿಗಳ ಚೌಕಟ್ಟಿನ ಮೇಲೆ ಸಪಾಟಾದ ಗೋಡೆಗಿಂತ ಅರ್ಧ ಕಮಾನುಗಳ ರಚನೆ ಮಾಡಿದರೆ ವೆಚ್ಚವೂ ಕಡಿಮೆ ಅಲ್ಲದೆ ನೋಡಲು ಕೂಡ ಬಹು ಚಂದ! ಕಮಾನುಗಳು ಗಟ್ಟಿಮುಟ್ಟ ಕೂಡ! ನನಗೆ ಬಾಗಿಲು ಕಿಟಕಿಗಳಿಗೆ ಚೌಕಟ್ಟುಗಳಿಂದ ಬಂಧಿಸುವದು ಇಷ್ಟವಿಲ್ಲ. ಚೌಕಟ್ಟುಗಳಿಲ್ಲದ ಎಷ್ಟೋ ಅಂದದ ಮನೆಗಳ ರಚನೆಗಳನ್ನು ನಾನು ಯಶಸ್ವಿಯಾಗಿ ಮಾಡಿದ್ದೇನೆ. ಕೋಟ್ಯಾನುಗಟ್ಟಲೆ ಜನರಿಗೆ ಮೂಲಭೂತ ಸೌಲಭ್ಯಗಳು ಇಲ್ಲ. ಎಷ್ಟೋ ಮನೆಗಳಲ್ಲಿ ಸಮತಟ್ಟಾದ ನೆಲ, ಮೇಲೆ ಛಪ್ಪರ, ಬಾಗಿಲು ಕಿಟಕಿಗಳಿಲ್ಲ. ಎಷ್ಟೋ ಕುಟುಂಬಗಳಿಗೆ ಒಂದೇ ಕೋಣೆಯಲ್ಲಿ ಆಯುಷ್ಯ ಕಳೆಯಬೇಕಾಗುತ್ತದೆ. ಅಲ್ಲಿ ಮಕ್ಕಳು ಓದಬಲ್ಲವೆ? ಸರಿಯಾಗಿ ನಿದ್ರಿಸಬಲ್ಲವೆ? ನಾವು ಗಗನದೆತ್ತರದ ಕಟ್ಟಡ, ಮಾಲ್, ಸಿನೇಮಾ ಹಾಲ್, ನದಿ – ಹಳ್ಳಗಳ ಮೇಲೆ ಸೇತುವೆ ಕಟ್ಟಿದ್ದೇವೆ. ಆದರೆ ಬಡಜನರ ಮನೆಯಂತಹ ಸೌಲಭ್ಯಗಳ ಬಗ್ಗೆ ಅಸಡ್ಡೆ ತೋರಿಸುತ್ತೇವೆ. ಕೊಳೆಗೇರಿಗಳಲ್ಲಿ ವಾಸಿಸುವರ ಬಗೆಗಿನ ನಮ್ಮ ದೃಷ್ಟಿಯನ್ನು ನಾವು ಪೂರ್ಣವಾಗಿ ಬದಲಿಸಬೇಕಾಗಿದೆ. ಜನರ ಮನೆ ಮತ್ತು ಪರಿಸರಗಳು ಒಂದಕ್ಕೊಂದು ಹಾಸುಹೊಕ್ಕಾಗಿವೆ. ನಮ್ಮೆಲ್ಲರ ಉತ್ಪಾದನೆ ಮತ್ತು ಸಾಮರ್ಥ್ಯ ಇವುಗಳನ್ನು ಅವಲಂಬಿಸಿವೆ. ”



“ನಾನು ಕೆಲ ಹಿಂದೂ ಮತ್ತು ಮುಸ್ಲಿಮ ಗೆಳೆಯರ ಬಗ್ಗೆ ಓದಿದಾಗ ಅವರೇ ನಿಜವಾದ ಕ್ರಿಶ್ಚಿಯನ್‌ರು ಎಂದೆನ್ನಿಸತೊಡಗಿತು. ನನಗಿಂತಲೂ ಅವರೇ ಒಳ್ಳೆಯ ಕ್ರಿಶ್ಚಿಯನ್‌ರು! ನನ್ನ 80 ವರುಷದ ಆಯುಷ್ಯದಲ್ಲಿ ನಾನು ಹಿಂಸೆ ಇದು ಒಂದು ಅಸಹ್ಯವಾದ ಗುಣಲಕ್ಷಣವೆಂಬುದನ್ನು ಕಂಡುಕೊಂಡಿದ್ದೇನೆ. ಧರ್ಮ, ರಾಷ್ಟ್ರ, ಜಾತಿ ಮುಂತಾದವುಗಳಿಗಾಗಿ ಮಾಡಿದ ಹಿಂಸೆ ನಮ್ಮಂತಹ ಸಾಮಾನ್ಯರ ಸಮಸ್ಯೆಗಳನ್ನು ಪರಿಹರಿಸಲು ಉಪಯೋಗಕ್ಕೆ ಬಾರದು. ನಿಜವಾದ ಧರ್ಮವೆಂದರೆ ಒಬ್ಬರನ್ನೊಬ್ಬರು ಪ್ರೀತಿಸುತ್ತಿರುವದು!”

ಲಾರಿ ಬೇಕರ ಇವರು ತಮ್ಮ ಕಕ್ಷಿದಾರರಿಂದ ಬಹು ಕಡಿಮೆ ಶುಲ್ಕವನ್ನು ತೆಗೆದುಕೊಳ್ಳುತ್ತಿದ್ದರು. ಅವರ ಶುಲ್ಕವೆಂದರೆ ಮೇಸನ್ನಿನ ದಿನಗೂಲಿಯಷ್ಟೇ! “ನಾನು ಒಂದೇ ವೇಳೆಗೆ 2-3 ಸೈಟುಗಳ ಮೇಲೆ ಕೆಲಸ ಮಾಡುತ್ತಿರುವದರಿಂದ ಅಷ್ಟು ಶುಲ್ಕ ನನ್ನ ಹೊಟ್ಟೆ ತುಂಬಲು ಸಾಕು. ಅದನ್ನು ತಿರುಗಿ ಮುಟ್ಟಿಸಲು ನನ್ನಿಂದ ಆಗದು. ನಿಜವಾಗಿ ನೋಡಿದರೆ ಇಷ್ಟೊಂದು ಶುಲ್ಕ ನಾನು ತೆಗೆದುಕೊಳ್ಳಬಾರದು. ಆದರೆ ನಾನು ಆಸೆಬುರುಕ!”

“ಕಟ್ಟಡಗಳ ರಚನೆ ಮಾಡುವಾಗ ನಾನು ಯಾವಾಗಲೂ ಸೈಟದ ಅತೀ ಎತ್ತರವಾದ ಶಿಖರ ಮತ್ತು ಅತೀ ಆಳವಾದ ಮಟ್ಟವು ಎಲ್ಲಿವೆ ಎಂಬುದರ ವಿಚಾರವನ್ನು ಮಾಡುತ್ತೇನೆ. ಎಲ್ಲಿ ಗಿಡಗಂಟಿಗಳಿವೆ, ಎಲ್ಲಿ ಸಾಕು ಪ್ರಾಣಿಗಳಿವೆ ಗಾಳಿ ಮಳೆಗಳ ದಿಕ್ಕು ಯಾವವು, ಈ ಎಲ್ಲ ಸವಾಲುಗಳ ಉತ್ತರ ನನ್ನ ರಚನೆಗಳಲ್ಲಿ ಇರುತ್ತವೆ. ಕಟ್ಟಡ ಕಟ್ಟುವಾಗ ನಾನು ಯಾವಾಗಲೂ ಅದರಲ್ಲಿ ವಾಸಿಸುವ ಜನರ ಬಗ್ಗೆ ಆಲೋಚನೆ ಮಾಡುತ್ತೇನೆ.”





**1990 ರಲ್ಲಿ ಭಾರತ**

**ಸರಕಾರವು ಲಾರಿ**

**ಬೇಕರ ಇವರಿಗೆ**

**ಪದ್ಮಶ್ರೀ ಪ್ರಶಸ್ತಿ**

**ಕೊಟ್ಟು ಗೌರವಿಸಿತು**




6 Every building should be UNIQUE. No two people, or families etc are alike, so why should their houses all be the same?

10 DONT ROB NATIONAL RESOURCES & do not use them ~~extravagantly~~ or ~~unnecessarily~~.

11 Be HONEST & TRUTHFUL in design & material usage, construction, costs, & about your own mistakes!

12 AVOID OPULANCE & 'SHOWING-OFF', and dont use currently fashionable gimmicks.

13 Get your CONSCIENCE out of deep-freeze & USE it. Let ALL YOU DO be honest & truthful – not only yr buildings.

14 Look closely at YOUR OWN PREJUDICES. Question them and see if they are still justifiable!

15 HAVE FAITH IN YOUR OWN CONVICTIONS & have courage to stick to them — but respect those of other people.

16 Make COST-EFFICIENCY your WAY OF LIFE – not merely "Low Cost for the Poor". Practice what you preach.

20 TRIM your drawings, staff, equipment, travel & transport, paper, & expenses.

(MY FEELINGS ABOUT BEING AN ARCHITECT!) Laurie .. Baker

